# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1723 (2070) |
| ಉತ್ತರಿಸುವ ದಿನಾಂಕ | 24-03-2021 |
| ಮಾನ್ಯ ಸದಸ್ಯರ ಹೆಸರು | ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಸರ್ಕಾರಿ ಕಛೇರಿಗಳಲ್ಲಿರುವ ಹಳೆಯ ಕಡತಗಳ ಸಂರಕ್ಷಣೆಗೆ ಇರುವ "ಸುರಭಿ ಯೋಜನೆ"ಯ ಅನುಷ್ಠಾನದ ಪ್ರಯತ್ನ ನಡೆದಿದೆಯೇ; | ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಪಾರಂಪರಿಕ ಕಾನೂನಾತ್ಮಕ ದಾಖಲೆಗಳನ್ನು "ಸುರಭಿ" ಎಂಬ ನಾಮದಡಿ ಹಂತ ಹಂತವಾಗಿ ಸ್ಕ್ಯಾನಿಂಗ್ ಮತ್ತು ಡಿಜಿಟೈಜ್ ಮಾಡಿ ಸಂರಕ್ಷಿಸಿಡಲು 2018-19ನೇ ಸಾಲಿನ ಆಯವ್ಯಯ ಪತ್ರದಲ್ಲಿ ಘೋಷಿಸಲಾಗಿರುತ್ತದೆ.<br><br>ಹಾಲಿ ಪೈಲಟ್ ಆಧಾರದ ಮೇಲೆ ಗಾಂಧಿನಗರ ಉಪ ನೋಂದಣಿ ಕಛೇರಿಯಲ್ಲಿ ಮಾತ್ರ ಅಳವಡಿಸಲಾಗುತ್ತಿದೆ. ಶಾಶ್ವತ ಹಾಗೂ ಹಳೆಯ ದಾಖಲೆಗಳನ್ನು ಸ್ಕ್ಯಾನಿಂಗ್ ಹಾಗೂ ಡಿಜಿಟಲೀಕರಣಗೊಳಿಸಲು ಸೇವಾ ಪೂರೈಕೆದಾರರನ್ನು ಆಯ್ಕೆ ಮಾಡಿ ಕಾರ್ಯಾದೇಶ ನೀಡಲಾಗಿರುತ್ತದೆ. |
| ಆ) | ರಾಜ್ಯದ ಅನೇಕ ಉಪನೋಂದಣಾಧಿಕಾರಿಗಳ ಕಛೇರಿಗಳಲ್ಲಿ ದಾಖಲೆ ಕೋರಿರುವ ಸಾಮಾನ್ಯ ಜನಗಳಿಗೆ ಸೂಕ್ತ ದಾಖಲೆ ನೀಡುವಲ್ಲಿ ಆಗುತ್ತಿರುವ ವಿಳಂಬ ತಡೆಯಲು ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು) | ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಕಾವೇರಿ ಆನ್‌ಲೈನ್ ಸೇವೆಗಳನ್ನು ಜಾರಿಗೆ ತಂದಿದ್ದು, ಇದರಲ್ಲಿ ಸಾರ್ವಜನಿಕರು ದಸ್ತಾವೇಜುಗಳ ದೃಢೀಕೃತ ಪ್ರತಿಯನ್ನು ಹಾಗೂ ಋಣಭಾರ ಪ್ರಮಾಣ ಪತ್ರಗಳನ್ನು ಆನ್‌ಲೈನ್ ಮುಖಾಂತರ ಪಡೆಯಬಹುದಾಗಿರುತ್ತದೆ.<br><br>ಇಲಾಖೆಯು ಒದಗಿಸುತ್ತಿರುವ ಸೇವೆಗಳನ್ನು ಸಕಾಲ ಅಧಿನಿಯಮದಡಿ ತರಲಾಗಿದ್ದು, ಸದರಿ ಸೇವೆಗಳನ್ನು ಒದಗಿಸಲು ಗರಿಷ್ಠ ಕಾಲಮಿತಿಯನ್ನು ನಿಗದಿಪಡಿಸಲಾಗಿರುತ್ತದೆ. |
| ಇ) | ಸುರಭಿ ಯೋಜನೆಯಡಿಯಲ್ಲಿ ಅಳವಡಿಸಿಕೊಂಡಿರುವ ಇಲಾಖೆಗಳು ಯಾವುವು; (ವಿವರ ನೀಡುವುದು) | "ಸುರಭಿ" ಎಂಬ ನಾಮದಡಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಪಾರಂಪರಿಕ ಕಾನೂನಾತ್ಮಕ ದಾಖಲೆಗಳನ್ನು ಹಂತ ಹಂತವಾಗಿ ಸ್ಕ್ಯಾನಿಂಗ್ ಮತ್ತು ಡಿಜಿಟೈಜ್ ಮಾಡಿ ಸಂರಕ್ಷಿಸಿಡಲು 2018-19ನೇ ಸಾಲಿನ ಆಯವ್ಯಯ ಪತ್ರದಲ್ಲಿ ಘೋಷಿಸಲಾಗಿರುತ್ತದೆ. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| | | ಸದರಿ ಯೋಜನೆಯು ನೋಂದಣಿ ಮತ್ತು ಮುದ್ರಾಂಕ ಇಲಾಖೆಗೆ ಸೀಮಿತವಾಗಿರುತ್ತದೆ. |
| ಈ) | ಬೆಳಗಾವಿ ಜಿಲ್ಲೆಯಲ್ಲಿ ಸುರಭಿ ಯೋಜನೆಯನ್ನು ಅನುಷ್ಠಾನಕ್ಕೆ ತರಲಾಗಿದೆಯೇ? (ಇಲಾಖಾವಾರು ಮಾಹಿತಿ ನೀಡುವುದು) | ಹಾಲಿ ಪೈಲಟ್ ಆಧಾರದ ಮೇಲೆ ಗಾಂಧಿನಗರ ಉಪ ನೋಂದಣಿ ಕಛೇರಿಯಲ್ಲಿ ಮಾತ್ರ ಅಳವಡಿಸಲಾಗಿರುತ್ತದೆ. ಅದರಂತೆ, ರಾಜ್ಯದ ಎಲ್ಲಾ ಉಪ ನೋಂದಣಿ ಕಛೇರಿಗಳಲ್ಲಿನ 1999 ರಿಂದ 2004 ರವರೆಗಿನ ದಾಖಲೆಗಳನ್ನು ಸ್ಕ್ಯಾನಿಂಗ್ ಮತ್ತು ಡಿಜಿಟಲೀಕರಣಗೊಳಿಸಲು ಅನುಮತಿಗಾಗಿ ಹಾಗೂ ಅನುದಾನದ ಬಿಡುಗಡೆ ಮಾಡುವ ಪ್ರಸ್ತಾವನೆಯು ಪರಿಶೀಲನೆಯಲ್ಲಿರುತ್ತದೆ ಹಾಗೂ ಬೆಳಗಾವಿ ಜಿಲ್ಲೆಯಲ್ಲಿ ಸುರಭಿ ಯೋಜನೆಯನ್ನು ಇನ್ನು ಅನುಷ್ಠಾನಗೊಳಿಸಲಾಗಿರುವುದಿಲ್ಲ. |

ಸಂಖ್ಯೆ: ಕಂಇ/147/ಎಂಎನ್ಎಸ್ಎ/2021

(ಆರ್.ಅಶೋಕ)
ಕಂದಾಯ ಸಚಿವರು